ಸಂತುಷ್ಟಳಾದ ದೇವಿ ದಯೆಯಿಂದ ನುಡಿದಳು— ರಾಜನೆ, ನಾನು ಸಾಕ್ಷಾತ್ತಾಗಿ ಬಂದು ನಿಂತಿರುವಾಗ ನೀನು ಸಂಪತ್ತನ್ನು ಬೇಡುತ್ತಿರುವೆ. ಆದರೂ ಈಗ ನಾನು ನಿನಗೆ ನೀನು ಬಯಸಿದ ಸಂಪತ್ತನ್ನು ಕೊಡುತ್ತೇನೆ. ನೀನು ಎಲ್ಲ ಶತ್ರುಗಳನ್ನು ಗೆದ್ದು ನಿಷ್ಕಂಟಕವಾದ ರಾಜ್ಯವಾಳಿ ಎಂಟನೆಯವನಾದ ಸಾವರ್ಣಿ ಮನುವಾಗುವೆ. ಜೊತೆಗೆ ಜ್ಞಾನವನ್ನೂ ನೀಡುತ್ತೇನೆ. ಆದರಿಂದ ಮುಂದೆ ಮುಕ್ತಿಯನ್ನೂ ಶ್ರೀಕೃಷ್ಣನ ದಾಸ್ಯವನ್ನೂ ನೀಡುತ್ತೇನೆ.

ನನ್ನನ್ನು ಪ್ರತ್ಯಕ್ಷ ಕಂಡೂ ಸಂಪತ್ತನ್ನು ಬೇಡುವ ಮಂದಬುದ್ಧಿಯವನು ಮಾಯೆಯಿಂದ ವಂಚಿತನಾಗಿರುತ್ತಾನೆ. ಆದರಿಂದಲೆ ವಿಷ್ಣುಭಕ್ತಿಯನ್ನು ಬಿಡುತ್ತಾನೆ. ಆದರೆ ನಾನೊಲಿದರೆ ಜ್ಞಾನಭಕ್ತಿಗಳನ್ನು ನೀಡುತ್ತೇನೆ.

ಬ್ರಹ್ಮನಿಂದ ತೊಡಗಿ ಹುಲ್ಲುಕಡ್ಡಿಯವರೆಗಿನ ಈ ಸಮಸ್ತ ಪ್ರಪಂಚವೂ ನಶ್ವರ. ಕೃಷ್ಣಪರಮಾತ್ಮನೊಬ್ಬನೆ ಶಾಶ್ವತ. ನಾನು ಬ್ರಹ್ಮ ವಿಷ್ಣು ಶಿವಾದಿಗಳಿಗೆ ಕಾರಣಳು. ಮೂಲಪ್ರಕೃತಿ. ಪ್ರಪಂಚಸೃಷ್ಟಿಗೆ ಬೀಜರೂಪಳು. ಗೋಲೋಕದ ರಾಸಮಂಡಲದ ವೃಂದಾವನದಲ್ಲಿ ಕೃಷ್ಣನ ಪ್ರಾಣಾಧಿಕಳಾದ ರಾಧೆ ನಾನೆ. ವಿಷ್ಣುಮಯೆ. ಬುದ್ಧಿಯ ಅಧಿಷ್ಠಾತ್ರಿ ನಾನೆ. ವೈಕುಂಠದಲ್ಲಿ ಲಕ್ಷ್ಮಿಯೂ ಸರಸ್ವತಿಯೂ ನಾನೆ. ಬ್ರಹ್ಮಲೋಕದಲ್ಲಿ ವೇದಮಾತೆ ಸರಸ್ವತಿ ನಾನೆ. ಗಂಗಾ ತುಲಸಿ ವಸುಂಧರೆಯರೂ ನಾನೆ. ಎಲ್ಲ ಸ್ತ್ರೀಯಲ್ಲಿಯೂ ಒಂದೊಂದು ಅಂಶದಿಂದ ನಾನಿದ್ದೇನೆ. ಕೃಷ್ಣ ತನ್ನ ಹುಬ್ಬಿನ ಕುಣಿತದಿಂದಲೆ ನನ್ನನ್ನು ಬಹುರೂಪಗಳಿಂದ ಸೃಷ್ಟಿಸಿದ್ದಾನೆ. ರೋಮಕೂಪದಲ್ಲಿ ವಿಶ್ವವನ್ನೆ ಧರಿಸುವ ಮಹಾವಿರಾಟ್ ಪುರುಷನನ್ನೂ ಕೃಷ್ಣನೆ ತನ್ನ ಹುಬ್ಬಿನ ಕುಣಿತದಿಂದ ಸೃಷ್ಟಿಸಿದ್ದಾನೆ. ಸಪ್ತಸಾಗರಯುಕ್ತವಾದ ಸಪ್ತದ್ವೀಪಾತ್ಮಕ ಭೂಲೋಕ ಕೆಳಗೆ ಸಪ್ತಪಾತಾಳಲೋಕಗಳು ಮೇಲೆ ಸಪ್ತಸ್ವರ್ಗಲೋಕಗಳು ಹೀಗೆ ವಿಸ್ತಾರವಾದ ಬ್ರಹ್ಮಾಂಡ, ಅದರೊಳಗೆ ಸೃಷ್ಟರಾದ ಬ್ರಹ್ಮ ವಿಷ್ಣು ಶಿವಾದಿಗಳು ಇವೆಲ್ಲಕ್ಕೂ ಕೃಷ್ಣನೆ ಒಡೆಯನೆಂಬ ಜ್ಞಾನವೆ ಅತ್ಯುತ್ತಮ.

**ವೇದಾನಾಂ ಚ ವ್ರತಾನಾಂ ಚ ತೀರ್ಥಾನಾಂ ತಪಸಾಂ ತಥಾ ।**
**ದೇವಾನಾಂ ಚೈವ ಸರ್ವೇಷಾಂ ಸಾರಃ ಕೃಷ್ಣ ಇತಿ ಸ್ಮೃತಃ ।**
**ತದ್ಭಕ್ತಿಹೀನೋ ಯೋ ಮೂಢಃ ಸ ಚ ಜೀವನ್ಮೃತೋ ಧ್ರುವಂ ।**

ಸಕಲ ವೇದಾಧ್ಯಯನ, ವ್ರತಾನುಷ್ಠಾನ ತೀರ್ಥಸ್ನಾನ ತಪಸ್ಸು ದೇವತಾರಾಧನೆಗಳಿಗೂ ಪರಮಧ್ಯೇಯ ಕೃಷ್ಣಭಕ್ತಿಯೊಂದೇ. ಅದಿಲ್ಲದ ಮೂಢ ಜೀವನ್ಮೃತನೆ ಸರಿ.

ವಿಷ್ಣುಭಕ್ತನನ್ನು ಸ್ಪರ್ಶಿಸಿದ ವಾಯುವಿನ ಸ್ಪರ್ಶದಿಂದ ತೀರ್ಥಗಳು ಪವಿತ್ರವಾಗುತ್ತವೆ. ವಿಷ್ಣುಮಂತ್ರ ಗ್ರಹಣ ಮಾತ್ರದಿಂದಲೆ ನರ ನಾರಾಯಣನಾಗುತ್ತಾನೆ.